ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 05 ನೇ ಫೆಬ್ರುವರಿ, 2021

ವಿಕಲಚೇತನರಿಗೆ ಜಾರಿಗೊಳಿಸಿರುವ ಯೋಜನೆಗಳ ಬಗ್ಗೆ

ಶ್ರೀ ಗೋವಿಂದ ರಾಜು(ವಿಧಾನಸಭೆಯಿಂದ ಚುನಾಯಿತರಾದವರು) -

90 (523) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ವಿಕಲಚೇತನರಿಗೆ ಜಾರಿಗೊಳಿಸಿರುವ ಯೋಜನೆಗಳು ಯಾವುವು; (ಮಾಹಿತಿ ನೀಡುವುದು)

(ಆ) ಕಳೆದ 3 ವರ್ಷಗಳಲ್ಲಿ ಕೋಲಾರ ಜಿಲ್ಲೆಗೆ ವಿಕಲಚೇತನರ ಅಭಿವೃದ್ಧಿಗಾಗಿ ಸರ್ಕಾರ ನಿಗದಿಪಡಿಸಿ, ಬಿಡುಗಡೆ ಮಾಡಿದ ವೆಚ್ಚವೆಷ್ಟು; (ಯೋಜನೆಗಳವಾರು ವಿವರ ನೀಡುವುದು)

(ಇ) ಕಳೆದ 3 ವರ್ಷಗಳಲ್ಲಿ ಕೋಲಾರ ಜಿಲ್ಲೆಯಲ್ಲಿ ವಿಕಲಚೇತನರಿಂದ ದ್ವಿಚಕ್ರ ವಾಹನಗಳಿಗಾಗಿ ಬಂದಿರುವ ಅರ್ಜಿಗಳ ಸಂಖ್ಯೆ ಎಷ್ಟು; (ತಾಲ್ಲೂಕವಾರು ಸಂಪೂರ್ಣ ಮಾಹಿತಿ ನೀಡುವುದು)

(ಈ) ಇವುಗಳಲ್ಲಿ ಇದುವರೆವಿಗೂ ವಿಲೇವಾರಿಯಾಗಿರುವ ಅರ್ಜಿಗಳ ಸಂಖ್ಯೆ ಎಷ್ಟು ಮತ್ತು ವಿಲೇವಾರಿಯಾಗದೆ ಉಳಿದಿರುವ ಅರ್ಜಿಗಳ ಸಂಖ್ಯೆ ಎಷ್ಟು; ವಿಲೇವಾರಿಯಾಗದೆ ಉಳಿದಿರಲು ಕಾರಣಗಳೇನು; (ತಾಲ್ಲೂಕವಾರು ಸಂಪೂರ್ಣ ಮಾಹಿತಿ ನೀಡುವುದು)

(ಉ) ವಿಲೇವಾರಿಯಾಗದೆ ಉಳಿದಿರುವ ಅರ್ಜಿಗಳನ್ನು ಯಾವ ಕಾಲಮಿತಿಯೊಳಗಾಗಿ ವಿಲೇವಾರಿ ಮಾಡಲಾಗುವುದು;

(ಊ) ಪ್ರಸ್ತುತ ಇವರುಗಳಿಗೆ ನೀಡುತ್ತಿರುವ ಮಾಶಾಸನದ ಮೊತ್ತವೆಷ್ಟು; ಇದನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವಾಗ ಎಷ್ಟು ಪ್ರಮಾಣದಲ್ಲಿ ಹೆಚ್ಚಿಸಲಾಗುವುದು ಮತ್ತು ಯಾವಾಗಿನಿಂದ ಜಾರಿಗೆ ತರಲಾಗುವುದು?